# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 420
ಸದಸ್ಯರ ಹೆಸರು : ಶ್ರೀ ಎನ್. ರವಿಕುಮಾರ್,
(ವಿಧಾನ ಸಭೆಯಿಂದ ಚುನಾಯಿತರಾದವರು)
ಉತ್ತರಿಸಬೇಕಾದ ದಿನಾಂಕ : 16.12.2021
ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಗಳು

| ಕ್ರ. ಸಂ | ಪ್ರಶ್ನೆಗಳು | ಉತ್ತರಗಳು |
|---|---|---|
| ಅ) | ಐ.ಎಂ.ಎ ಹಗರಣದಲ್ಲಿ ಆರೋಪಿತರಾದ ಐಪಿಎಸ್ ಅಧಿಕಾರಿಗಳಿಗೆ ಯಾವ ದಿನಾಂಕದಂದು ಇಲಾಖಾ ವಿಚಾರಣೆ ಸಂಬಂಧ ನೋಟಿಸ್ ನೀಡಲಾಗಿದೆ; ಯಾವ ಅಧಿಕಾರಿಯನ್ನು ವಿಚಾರಣೆ ಅಧಿಕಾರಿಯನ್ನಾಗಿ ನೇಮಿಸಲಾಗಿದೆ; ಇದುವರೆಗೆ ಎಷ್ಟು ದಿನಗಳ ಕಾಲ ಇಲಾಖಾ ವಿಚಾರಣೆ ನಡೆಸಲಾಗಿದೆ; (ದಿನಾಂಕದೊಂದಿಗೆ ಮಾಹಿತಿ ನೀಡುವುದು) | ಐ.ಎಂ.ಎ ಪ್ರಕರಣದಲ್ಲಿ ಆರೋಪಿತರಾದ ಶ್ರೀ ಹೇಮಂತ್ ನಿಂಬಾಳ್ಕರ್, ಐಪಿಎಸ್ ಹಾಗೂ ಶ್ರೀ ಅಜಯ್ ಹಿಲೋರಿ, ಐಪಿಎಸ್ ಇವರಿಗೆ ಕ್ರಮವಾಗಿ ದಿನಾಂಕ: 02.02.2021 ರಂದು ಹಾಗೂ 01.02.2021 ರಂದು ದೋಷಾರೋಪಣಾ ಪಟ್ಟಿ ಜಾರಿ ಮಾಡಲಾಗಿದೆ.<br><br>ಶ್ರೀ ಹೇಮಂತ್ ನಿಂಬಾಳ್ಕರ್, ಐಪಿಎಸ್ ಇವರು ಈ ದೋಷಾರೋಪಣಾ ಪಟ್ಟಿ ವಿರುದ್ಧ ಕೇಂದ್ರಿಯ ಆಡಳಿತ ನ್ಯಾಯ ಮಂಡಳಿಯಲ್ಲಿ ಪ್ರಕರಣವನ್ನು ದಾಖಲಿಸಿರುತ್ತಾರೆ.<br><br>ಶ್ರೀ ಅಜಯ್ ಹಿಲೋರಿ, ಐಪಿಎಸ್ ಇವರ ಇಲಾಖಾ ವಿಚಾರಣೆ ಕುರಿತಂತೆ ಶ್ರೀ ಜಿ. ವಿ ಕೃಷ್ಣ ರಾವ್, (ನಿವೃತ್ತ ಭಾ.ಆ.ಸೇ) ಇವರನ್ನು ವಿಚಾರಣಾಧಿಕಾರಿಯವರನ್ನಾಗಿ ಹಾಗೂ ಶ್ರೀ ಸುಬ್ರಮಣ್ಯೇಶ್ವರ ರಾವ್, ಐಪಿಎಸ್ ಇವರನ್ನು ಮಂಡನಾಧಿಕಾರಿಯವರನ್ನಾಗಿ ದಿ: 27.09.2021 ನೇಮಕ ಮಾಡಲಾಗಿದೆ. ವಿಚಾರಣೆ ಪ್ರಗತಿಯಲ್ಲಿದೆ. |
| ಆ) | ತನಿಖಾ ಸಂಸ್ಥೆಯು ಐ.ಎಂ.ಎ ಹಗರಣದಲ್ಲಿ ಆರೋಪಿತರಾದ ಐಪಿಎಸ್ ಅಧಿಕಾರಿಗಳ ಮೇಲೆ ಯಾವ ರೀತಿಯ ಕ್ರಮ ಕೈಗೊಳ್ಳಬೇಕೆಂದು ಶಿಫಾರಸ್ಸು ಮಾಡಿದೆ; ಯಾವ ದಿನಾಂಕದಂದು ಮಾಡಿದೆ; ಈ ಕುರಿತು ಸರ್ಕಾರ ಕೈಗೊಂಡ ಕ್ರಮಗಳೇನು; | ತನಿಖಾ ಸಂಸ್ಥೆಯು ಆರೋಪಿತ ಅಧಿಕಾರಿಗಳ ವಿರುದ್ಧ ನ್ಯಾಯಲಯದಲ್ಲಿ ಪ್ರಕರಣವನ್ನು ದಾಖಲಿಸಲು ಅಭಿಯೋಜನಾ ಮಂಜೂರಾತಿಯನ್ನು ಈ ಇಬ್ಬರೂ ಅಧಿಕಾರಿಗಳ ವಿರುದ್ಧ ದಿನಾಂಕ: 18.12.2019 ರಂದು ಕೋರಿರುತ್ತದೆ. ದಿನಾಂಕ: 09.09.2020 ರಂದು ಅಭಿಯೋಜನಾ ಮಂಜೂರಾತಿಯನ್ನು ನೀಡಲಾಗಿದೆ. |

| | | |
|---|---|---|
| | | ಸದರಿ ಅಧಿಕಾರಿಗಳ ವಿರುದ್ಧ ಇಲಾಖೆಯಿಂದ ಶಿಸ್ತು ಕ್ರಮ ಕೈಗೊಳ್ಳಲು ಸಹ ಶಿಫಾರಸ್ಸು ಮಾಡಿರುತ್ತದೆ. ಅದರಂತೆ, ದಿನಾಂಕ: 01.02.2021 ಹಾಗೂ 02.02.2021 ರಂದು ದೋಷಾರೋಪಣಾ ಪಟ್ಟಿಯನ್ನು ಜಾರಿ ಮಾಡಲಾಗಿದೆ.<br><br>ದಿನಾಂಕ: 28.06.2021 ರಂದು ಭ್ರಷ್ಟಾಚಾರ ನಿಗ್ರಹ ಕಾಯ್ದೆ ಅಡಿ ಶ್ರೀ ಅಜಯ್ ಹಿಲೋರಿ, ಐಪಿಎಸ್ ಇವರನ್ನು ಅಭಿಯೋಜನೆಗೆ ಒಳಪಡಿಸಲು ಮಂಜೂರಾತಿಯನ್ನು ಕೋರಿರುತ್ತದೆ. ಅದರಂತೆ, ದಿನಾಂಕ: 26.07.2021 ರಂದು ಸಕ್ಷಮ ಪ್ರಾಧಿಕಾರವಾದ ಕೇಂದ್ರ ಗೃಹ ಮಂತ್ರಾಲಯಕ್ಕೆ ಪ್ರಸ್ತಾವನೆಯನ್ನು ಸಲ್ಲಿಸಲಾಗಿದೆ.<br><br>ಶ್ರೀ ಹೇಮಂತ್ ನಿಂಬಾಳ್ಕರ್, ಐಪಿಎಸ್ ಇವರ ಪ್ರಕರಣದಲ್ಲಿ ದಿನಾಂಕ: 26.11.2021 ರಂದು ಅಭಿಯೋಜನಾ ಮಂಜೂರಾತಿಯ ಪ್ರಸ್ತಾವನೆ ಸ್ವೀಕೃತವಾಗಿದೆ. |
| ಇ) | ಐ.ಎಂ.ಎ ಹಗರಣದಲ್ಲಿ ಆರೋಪಿತರಾದ ಐಪಿಎಸ್ ಅಧಿಕಾರಿಗಳ ಮೇಲಿನ ಆರೋಪದ ಕುರಿತು ಯು.ಪಿ.ಎಸ್ಸಿ ಮತ್ತು ಕೇಂದ್ರ ಗೃಹ ಇಲಾಖೆಗೆ ಪತ್ರ ಬರೆಯಲಾಗಿದೆಯೇ; ಯಾವ ದಿನಾಂಕದಂದು ಪತ್ರ ಬರೆಯಲಾಗಿದೆ; ಭ್ರಷ್ಟ ಅಧಿಕಾರಿಗಳನ್ನು ಕಡ್ಡಾಯ ನಿವೃತ್ತಿಗೊಳಿಸುವ ನಿಯಮದ ಕುರಿತು ಸರ್ಕಾರ ಕೈಗೊಂಡ ಕ್ರಮಗಳೇನು? (ವಿವರ ನೀಡುವುದು) | ಶ್ರೀ ಅಜಯ್ ಹಿಲೋರಿ, ಐಪಿಎಸ್ ಇವರನ್ನು ಅಭಿಯೋಜನೆಗೆ ಒಳಪಡಿಸಲು ದಿನಾಂಕ: 26.07.2021 ರಂದು ಕೇಂದ್ರ ಗೃಹ ಮಂತ್ರಾಲಯಕ್ಕೆ ಪತ್ರ ಬರೆಯಲಾಗಿದೆ.<br><br>ಇಲಾಖಾ ವಿಚಾರಣೆ ಮತ್ತು ನ್ಯಾಯಾಂಗ ಪ್ರಕರಣಗಳು ಸದರಿ ಅಧಿಕಾರಿಗಳ ವಿರುದ್ಧ ಬಾಕಿ ಇರುವುದರಿಂದ, ವಿಚಾರಣೆ ಅಂತಿಮಗೊಂಡ ನಂತರ ಕ್ರಮ ಕೈಗೊಳ್ಳಬೇಕಾಗುತ್ತದೆ. |

ಸಂಖ್ಯೆ: ಇ-ಸಿಆಸುಇ 214 ಎಸ್‌ಪಿಎಸ್ 2021

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ